

# ಕಡೇ ಮಾತು

## ರೈತ ಗೀತ

ಸವಿತಾ ನಾಗಭೂಷಣ





ದೊರೆ ಕಿವುಡನಾಗಿದ್ದಾನೆ
ನಮ್ಮ ಕೂಗು ಅವನನ್ನು ತಾಕುತ್ತಿಲ್ಲ!

ದೊರೆ ಕುರುಡನಾಗಿದ್ದಾನೆ
ನಮ್ಮ ಪಡಿಪಾಟಲು ಅವನಿಗೆ ಕಾಣುತ್ತಿಲ್ಲ !

ದೊರೆ ಮೂಗನಾಗಿದ್ದಾನೆ...
ತನ್ನ ದನಿಯನ್ನೇ ಒತ್ತೆ ಇಟ್ಟು ಬಿಟ್ಟಿದ್ದಾನೆ !

ಅವನು ನಮ್ಮನ್ನು ಮುಟ್ಟಲಾರ...
ಬಾಚಿ ತಬ್ಬಿಕೊಳ್ಳಲಾರ...
ಹತ್ತಿರ ಕೂಡ ಬರಲಾರ....
ಏಕೆಂದರೆ
ಮುಳ್ಳಿನ ಬೇಲಿ ಹಬ್ಬಿಸಿದ್ದಾನೆ....
ಕಬ್ಬಿಣದ ಮೊಳೆಯ ಹಾಸು ಹಾಸಿದ್ದಾನೆ
ತಡೆಗೋಡೆ ಬೇರೆ ಎಬ್ಬಿಸಿದ್ದಾನೆ..

ಮುಟ್ಟಬಾರದೆಂದೇ...
ದೊಡ್ಡ ಕಂದಕವನ್ನೇ ತೋಡಿಕೊಂಡಿದ್ದಾನೆ ?!

ಹೇಳು ದೊರೆ...
ನೀನು ಯಾರಿಗೆ ವಚನಬದ್ಧನಾಗಿರುವೆ?
ಯಾರ ಹಂಗಿಗೆ ಸಿಲುಕಿ ಹೀಗೆ ಒದ್ದಾಡುತಿರುವೆ?

ಹೇಳು...ನೀನೂ ಅಸಹಾಯಕನೆ?
ಹೃದಯವಿಲ್ಲದ ಮನುಷ್ಯ ಈ ಜಗದಲ್ಲೇ ಇಲ್ಲ!
ನಾ ನಿನ್ನ ಮುಟ್ಟಬೇಕಿದೆ.....
ನಿನ್ನೊಂದಿಗೆ ಮಾತನಾಡಬೇಕಿದೆ....
ಆಗಲೇ ಹೊಸ ಆಲೋಚನೆ, ವಿಮೋಚನೆ...



ಚಿಕ್ಕಗೌಡ್ರ ನಾಗನಗೌಡ - ಶಿವಮ್ಮ ದತ್ತಿ - ಇಪ್ಪತ್ತನೇ ಪ್ರಕಟಣೆ

# ಕಡೇ ಮಾತು

## ರೈತ ಗೀತ

ಸವಿತಾ ನಾಗಭೂಷಣ



ಲೋಹಿಯಾ ಪ್ರಕಾಶನ
ಬಳ್ಳಾರಿ

**KADE MATHU (Raitha Geeta)**
A Collection of poems
by
**Savitha Nagabhushana**
HIG-5, 'Nudi', Kallahalli
Vinobanagara, Shivamogga - 577 204
Mobile : 9481351079

Published by
**LOHIYA PRAKASHANA**
'Kshitija', Kappagallu Road
Gandhinagar, Ballari - 583103
Tel : 08392-257412
Mobile : 9900750549

First Impression : 2021



Pages : 40

Cover Design : Sudhakar Darbe

**ಕಡೇ ಮಾತು (ರೈತ ಗೀತ)**
ಕವಿತೆಗಳು – ಸವಿತಾ ನಾಗಭೂಷಣ

ಬೆಲೆ : ಹರನೆಂಬುದೇ ಸತ್ಯ... ಪುಸ್ತಕದ ಜೊತೆಗೆ ಉಡುಗೊರೆ

ಪ್ರಕಾಶಕರು :
**ಲೋಹಿಯಾ ಪ್ರಕಾಶನ**
'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ–583103
ಮೊಬೈಲ್ : 9900750549

ಮುದ್ರಣ :
**ವಿಶ್ವಾಸ್ ಪ್ರಿಂಟ್ಸ್**
ಬೆಂಗಳೂರು

# ನನ್ನ ಮಾತು

ಬಾಲ್ಯದಲ್ಲಿ ಕಾರ್ಕಳದ ದೊಡ್ಡ ಅಂಕಣದ ಅಜ್ಜಿಯ ಮನೆಯಲ್ಲಿ ಸಂತೋಷದಿಂದ ಆಟವಾಡಿದ್ದ ನೆನಪು ಇನ್ನೂ ಮನದಲ್ಲಿ ಅಚ್ಚೊತ್ತಿದಂತಿದೆ. ತೆಂಗು, ಹಲಸು, ರಾಮಫಲದ ಮರಗಳ ನೆರಳು ಇನ್ನೂ ತಲೆಯ ಮೇಲೆ ಇದ್ದಂತಿದೆ. ನಾನು ತೀರಾ ತೀರಾ ಚಿಕ್ಕವಳಿದ್ದಾಗ ನನ್ನ ಕಿವಿಯ ಮೇಲೆ ಪದೇ ಪದೇ ಬೀಳುತ್ತಿದ್ದ ಹೆಸರು 'ಇಂತ್ರೂ' ಎಂಬ ಮನುಷ್ಯನದು. ಆತ ನಮಗೆ ೧೫ ಮೂಡೆ ಭತ್ತವನ್ನು ಅಕ್ಕಿ ಮಾಡಿ ತಂದುಕೊಡುತ್ತಿದ್ದ. ಸುಮಾರು ೪೦ ವರುಷಗಳ ಕಾಲ ಮಳೆ ಬರಲಿ ಬಿಡಲಿ, ಸಾವು ನೋವುಗಳೇನೇ ಇರಲಿ ತಪ್ಪದೆ ನಿರ್ವಂಚನೆಯಿಂದ ಕಟಾವು ಆದ ಕೂಡಲೆ ತಂದುಕೊಡುತ್ತಿದ್ದ. ತುಂಬಾ ನಿಯತ್ತಿನ ಮನುಷ್ಯ ಎಂದು ನನ್ನ ಅಜ್ಜಿ ನನ್ನ ತಂದೆಯ ಬಳಿ ಹೇಳುತ್ತಿದ್ದುದನ್ನು ಕೇಳಿಸಿಕೊಂಡ ನೆನಪಿದೆ. ಹಾಗಾಗಿ ಗೇಣಿಗೆ ಕೊಟ್ಟ ಭೂಮಿ ಕಳಕೊಂಡಾಗ ನನ್ನ ಅಜ್ಜಿ ವಿಷಾದ ಪಡಲಿಲ್ಲ. ನ್ಯಾಯಯುತವಾಗಿ ಅದು ಅವರಿಗೇ ಸೇರಬೇಕಾದ್ದು ಎಂದು ಮಾತುಕತೆಯಾಡಿದ್ದು ನೆನಪಿನಲ್ಲಿದೆ. ಆಗಾಗ್ಗೆ ಕಾರ್ಕಳದ ಕಂದಾಯ ಕಛೇರಿಯಿಂದ ಒಂದು ನೋಟಿಸು ನನ್ನ ತಂದೆಯ ಹೆಸರಿಗೆ ಬರುತ್ತಿತ್ತು. ಲನೆಯ ಇಯತ್ತೆಯಲ್ಲಿದ್ದ ನಾನು ಅದನ್ನು ಅಜ್ಜಿಗೆ ಓದಿ ಹೇಳುತ್ತಿದ್ದೆ. ಈ ತುಂಡು ಭೂಮಿಯ ಸಂಬಂಧವೇ ಆ ನೋಟಿಸು. ಹಾಜರಾಗಿ, ಏನಾದರೂ ತಕರಾರಿದೆಯೇ ಎಂದು ತಿಳಿಸಿ, ಪರಿಹಾರದ ಮೊತ್ತ ಪಡೆದುಕೊಂಡು ಹೋಗಿರಿ ಎಂದೇನೋ ಇರುತ್ತಿತ್ತು. ನನ್ನ ತಂದೆ, ನಾನು ಆ ಜಮೀನಿನ ಮುಖ ಕೂಡ ನೋಡಿಲ್ಲ, ನನಗದು ಬೇಕಿಲ್ಲ ಎಂದು ಉತ್ತರಿಸದೆ ಸುಮ್ಮನಿರುವುದನ್ನು ನೋಡಿ ನಾನು ಕಸಿವಿಸಿಗೊಳ್ಳುತ್ತಿದ್ದೆ. ಕಿಂಚಿತ್ತು ಹಣ ಸಿಕ್ಕರೂ ನಮಗೆ ಬೇಕಿತ್ತು ಅಷ್ಟು ಹಣದ ಅವಶ್ಯಕತೆ ಇದ್ದ ದಿನಗಳವು. ಎರಡೋ ಮೂರೋ ನೋಟಿಸು ಬಂದು ಕ್ರಮೇಣ ನೋಟಿಸು ಬರುವುದು ನಿಂತು ಹೋಯಿತು. ಪೂರ್ವಿಕರ ಭೂಮಿ. ಮನೆ, ಎಲ್ಲವನ್ನೂ ನನ್ನ ಅಜ್ಜಿ ಮತ್ತು ತಂದೆಯವರ ವೈರಾಗ್ಯ/

ನಿರ್ಲಕ್ಷ್ಯದಿಂದಲೇ ನಾವು ಕಳೆದುಕೊಂಡೆವು, ಹಾಗಾಗಿ ಒಂದು ತುಂಡು ಭೂಮಿ ಕೂಡ ನಮ್ಮ ಪಾಲಿಗಿಲ್ಲ ಎಂದು ನನ್ನ ತಮ್ಮ ದೊಡ್ಡವನಾದ ಮೇಲೆ ತಕರಾರು ತಗೆಯುತ್ತಿದ್ದದು, ನಾವೆಲ್ಲಾ ನಗುತ್ತಿದ್ದುದು ಈಗ ನೆನಪಾಗುತ್ತಿದೆ.

ನಮ್ಮ ಬಂಧು-ಬಳಗದ/ಸ್ನೇಹಿತರ ಪೈಕಿ ೮೦% ಜನ ಭೂಮಿ ಹೊಂದಿದ್ದಾರೆ. ಆಗಾಗ್ಗೆ ಅವರ ಜಮೀನಿಗೆ ಹೋದಾಗ ಅಲ್ಲಿ ಪಚ್ಚೆ ಪೈರಿನ ನಡುವೆ ಕಾಲಾಡಿದಾಗ ಆಸೆಯೂ, ಅಸೂಯೆಯೂ ಉಂಟಾಗುತ್ತದೆ. ಏ ನಮಗೂ ಇಲ್ಲಿ ಮನೆಕಟ್ಟಿಕೊಳ್ಳಲು ಒಂದು ತುಂಡು ಭೂಮಿ ಕೊಡಿ ಎಂದು ನಾವು ಅರ್ಜಿ ಹಾಕುವುದುಂಟು. ಅಯ್ಯೋ ಈ ಭೂಮಿಯ ಕತೆ ಏನು ಅಂತ ಹೇಳಲಿ? ಎಂದು ಅವರು ಗೋಳಾಡತೊಡಗುತ್ತಾರೆ.. ಅದನ್ನು ನಿರ್ವಹಿಸುವುದು ಅಷ್ಟು ಸುಲಭ ಅಲ್ಲ ಎಂದು ಮನದಟ್ಟು ಮಾಡುತ್ತಾರೆ. ಹೌದು ಎನಿಸತೊಡಗುತ್ತದೆ.. ಹೊಟ್ಟೆ ಬಟ್ಟೆಗೆ ಕೊರತೆಯಾಗದು. ಆದರೆ ಲಾಭ ಎನ್ನುವುದು ಅದು ತಂದುಕೊಡಲಾರದು ಆದರೆ ಆ ಸಂಬಂಧ ಕಡಿದುಕೊಳ್ಳಲೂ ಆಗದು. ಈ ಸಂಬಂಧ ನೀಡುವ ನೆಮ್ಮದಿಯನ್ನು ದುಡ್ಡಿನ ರೂಪದಲ್ಲಿ ಅಳೆಯಲಾಗದು. ಇದನ್ನೆಲ್ಲಾ ನಾನು ಹೇಳುತ್ತಿರುವುದು ಉತ್ತು ಬಿತ್ತಿ ಬೆಳೆಯುವ ತಮ್ಮ ಕೈಯನ್ನು ಮಣ್ಣು ಮಾಡಿಕೊಳ್ಳುತ್ತಿರುವ ರೈತರ ಬಗ್ಗೆ. ಅಂತೆಯೇ ಇವತ್ತು ಅವನ ಕಣ್ಣೀರು ನನಗೆ ತಾಕಿದೆ. ನಾನು ಹತ್ತನೆಯ ಇಯತ್ತೆಯಲ್ಲಿದ್ದಾಗ 'ಚೋಮನ ದುಡಿ' ಸಿನಿಮಾ ನೋಡಿದ್ದು. ಒಂದು ತುಂಡು ಭೂಮಿ ಚೋಮನಿಗೆ ಕೊಡಲಾಗದ ಸಂಪ್ರದಾಯದ ಸಂಕೋಲೆ /ಹೃದಯಹೀನತೆ ನನ್ನ ಎದೆಯಲ್ಲಿ ಕೋಲಾಹಲವನ್ನೇ ಅಂದು ಅದು ಉಂಟುಮಾಡಿತ್ತು. ತೊಂಭತ್ತರ ದಶಕದಲ್ಲಿ ರೈತರ ಸರಣಿ ಅತ್ಮಹತ್ಯೆ ನಡೆದಾಗ ಪ್ರತಿದಿನ ಪೇಪರಿನಲ್ಲಿ ಬರುವ ರೈತರ ಆತ್ಮಹತ್ಯೆಯ ವಿವರಗಳನ್ನು ಡೈರಿಯಲ್ಲಿ ಬರೆದಿಟ್ಟುಕೊಳ್ಳತ್ತಿದ್ದೆ. ವರುಷಗಟ್ಟಲೆ ಅದು ಮುಂದುವರೆದಾಗ ವಿಹ್ವಲಗೊಂಡಿದ್ದೆ. ಕೆಲವೊಮ್ಮೆ ಒಂದುಲಕ್ಷ, ಎರಡು ಲಕ್ಷ ಸಾಲಮಾಡಿಕೊಂಡು ತೀರಿಸಲಾಗದೆ ಅದಕ್ಕಾಗಿ ಆತ್ಮಹತ್ಯೆ ಮಾಡಿಕೊಂಡರು ಎಂದು ಓದಿದಾಗ ನನ್ನಂತವರ ಕೈಗಳಲ್ಲಿರುವ ಎರಡು ಚಿನ್ನದ ಬಳೆಗಳು ಒಬ್ಬ ರೈತನ ಜೀವ ಉಳಿಸಬಹುದಲ್ಲವೇ ಎಂದೆನಿಸುತ್ತಿತ್ತು. ಇವೆಲ್ಲಾ ಭಾವೋದ್ವೇಗದ ಪ್ರತಿಕ್ರಿಯೆಗಳೇ ಇರಬಹುದು. ಸದ್ಯ ಕೇಂದ್ರ ಸರಕಾರ ಜಾರಿ ತರಲಿರುವ ನೂತನ ಕೃಷಿ ಕಾಯಿದೆಗಳು ರೈತರ ಸಾಂಪ್ರದಾಯಿಕ ಕೃಷಿಯ ಚಿತ್ತವನ್ನೇ ಪಲ್ಲಟಗೂಳಿಸುವ ಉದ್ದೇಶ ಹೊಂದಿದ್ದು. ಕೃಷಿಯನ್ನು ಉದ್ಯಮವನ್ನಾಗಿಸುವ ಆಶಯ ಹೊಂದಿದೆ. ಈ ಹೊಸ ನೀತಿಯನ್ನು

ವಿರೋಧಿಸಿ ಕಳೆದ ೭೦ ದಿನಗಳಿಂದ ತಮ್ಮ ಜಮೀನು, ಮನೆ, ಮಠ ತೊರೆದು ದೇಶದ ರಾಜಧಾನಿ ದೆಹಲಿಯ ಗಡಿಭಾಗಗಳಲ್ಲಿ ಪಂಜಾಬು ಮತ್ತು ಹರಿಯಾಣ, ಉತ್ತರಪ್ರದೇಶದ ರೈತರು ಸಾವಿರಾರು ಸಂಖ್ಯೆಯಲ್ಲಿ ಜಮಾಯಿಸಿ ದಿಲ್ಲಿ ಪ್ರವೇಶಿಸಿ ಅಹವಾಲು ಸಲ್ಲಿಸಲು ಮುಂದಾಗಿದ್ದಾರೆ. ಆದರೆ ಪೋಲಿಸರು ಅವರನ್ನು ತಡೆದಿದ್ದರಿಂದ ಚಳಿ, ಗಾಳಿ, ಮಳೆ, ಬಿಸಿಲು ಲೆಕ್ಕಿಸದೆ ಅಲ್ಲಿಯೇ ಬೀಡು ಬಿಟ್ಟಿದ್ದು ನೂತನ ಕೃಷಿ ಕಾಯಿದೆ ವಾಪಸಾತಿ ಮತ್ತು ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ನೀಡಬೇಕೆಂದು ಒತ್ತಾಯಿಸಿ ತಮ್ಮ ಬೇಡಿಕೆ ಈಡೇರುವ ತನಕ ಹೋರಾಡುವುದಾಗಿ, ತಮ್ಮ ಮನೆಗಳಿಗೆ ಹಿಂದಿರುಗುವುದಿಲ್ಲ ಎಂದು ಪಟ್ಟು ಹಿಡಿದಿದ್ದಾರೆ. ಹಲವು ಸುತ್ತಿನ ಮಾತುಕತೆಗಳು ಫಲಶ್ರುತಿ ನೀಡಿಲ್ಲ. ವಿವಾದಾತ್ಮಕ ನೂತನ ಕೃಷಿ ಕಾಯಿದೆಗಳು ರೈತಾಪಿ ಬದುಕು, ಸಂಸ್ಕೃತಿ, ರೈತರ ಆಶೋತ್ತರ, ಅಸ್ಮಿತೆ. ಅಸ್ತಿತ್ವ, ಘನತಗೆ ಕುಂದು ತರುತ್ತವೆ, ಅವು ನಮಗೆ ಬೇಕಿಲ್ಲ ಎಂದು ರೈತರು ಆತಂಕ ವ್ಯಕ್ತಪಡಿಸುತ್ತಿದ್ದಾರೆ. ಬಾಲ್ಯದಿಂದಲೂ, ಕೈಕೆಸರು ಮಾಡಿಕೊಂಡು ಸ್ವಾಭಿಮಾನದಿಂದ ಬದುಕು ನಡೆಸುತ್ತಿರುವ ರೈತರನ್ನು ನಾನು ನೋಡಿರುವೆ. ಅವರೊಡನೆ ಒಡನಾಡಿರುವೆ. ಅಂತೆಯೇ ಈ ಹೊತ್ತು ರೈತರ ಆತಂಕ, ಹತಾಶೆ, ಕಣ್ಣೀರು ನನ್ನೀ ರೈತಗೀತೆಗಳಿಗೆ ಕಾರಣವಾಗಿದೆ. ತೊಂಭತ್ತರ ದಶಕದಲ್ಲಿ ಅನೇಕ ಅಂತರರಾಷ್ಟ್ರೀಯ ವ್ಯಾಪಾರ ಒಪ್ಪಂದಗಳಿಗೆ ನಿರ್ವಾಹವಿಲ್ಲದೆ ಸಹಿ ಹಾಕಿರುವ ನಮ್ಮ ನೇತಾರರ ಅಸಹಾಯಕತೆಯ ಫಲವೇ ಈ ಹೊತ್ತಿನ ಕೃಷಿ ಕಾಯಿದೆಗಳಿರಬಹುದು. ಇದನ್ನು ನಿವಾರಿಸಿಕೊಳ್ಳುವ ಬಗೆಯೂ ಕಾಣದು. ನಾಳೆ ದಿನ ನಮ್ಮ ರೈತನನ್ನು ಪರದೇಶಿ ಹಂದಿ, ಹಸು, ಕುರಿ, ಕೋಳಿಗಳಿಗೆ ಬರೀ ಹಿಂಡಿ ಮೇವು ಮಾತ್ರ ಬೆಳೆಯುವಷ್ಟಕ್ಕೇ ಸೀಮಿತಗೊಳಿಸಿ ಬಿಡುತ್ತಾರೋ ಏನೋ. ಐ.ಟಿ. ಕೂಲಿಗಳಂತೆಯೇ ರೈತಕೂಲಿಗಳು ಮುಂದಿನ ದಿನಗಳಲ್ಲಿ ಕೈತುಂಬಾ ದುಡ್ಡು ಸಂಪಾದಿಸಬಹುದು. ಆದರೆ ನೆಮ್ಮದಿ? ರೈತ ಪರಾಧೀನನಾಗುವುದೆಂದರೆ ಇಡೀ ದೇಶವೇ ಪರಾಧೀನವಾದಂತೆ. ಈ ಹೊತ್ತು ನಮ್ಮ ದೇಶದ ಗೋದಾಮಿನಲ್ಲಿ ಕೊಳತು/ಹುಳಿತು ಹೋಗುವಷ್ಟು ಕಾಳುಕಡಿ ಇವೆ. ನಾಳೆ?

ರೈತರ ಆತಂಕ ಈಗ ನನ್ನವೂ ಆಗಿ 'ಕಡೇ ಮಾತು' ಮೂಡಿದೆ. ಹೇಗೆ ಸ್ವೀಕರಿಸಿದರೂ ಸರಿಯೇ, ತಲೆ ಬಾಗುವೆ.

ಶಿವಮೊಗ್ಗ — **ಸವಿತಾ ನಾಗಭೂಷಣ**

೩.೨.೨೦೨೧ — ದೂ : ೯೪೪೮೧೩೫೧೦೭೯

# ಕೃತಜ್ಞತೆಗಳು

ಕವನಗಳ ಮೊದಲ ಓದುಗರಾದ ಸಂಗಾತಿ ಡಿ.ಎಸ್. ನಾಗಭೂಷಣ ಇವರಿಗೆ –

ಸದಾ ಒಳ್ಳೆಯ ಮಾತುಗಳನ್ನಾಡಿ ಪ್ರೋತ್ಸಾಹಿಸುವ ಎಲ್ಲ ಗೆಳೆಯ ಗೆಳತಿಯರಿಗೆ –

ಪತ್ರಿಕೆಗಳಲ್ಲಿ/ಫೇಸ್ ಬುಕ್/ವಾಟ್ಸಾಪ್‌ಗಳಲ್ಲಿ ಓದಿ ಮಿಡಿದ ಅಸಂಖ್ಯ ಓದುಗರಿಗೆ, ಬಂಧುಬಳಗಕ್ಕೆ –

ನನ್ನ ಕವನಗಳನ್ನು ಕಾಳಜಿಯಿಂದ ಕಾಪಿಟ್ಟು, ಒಪ್ಪವಾಗಿ ಬೆರಳಚ್ಚಿಸಿ, ಮುದ್ರಣಕ್ಕೆ ಅಣಿಮಾಡಿಕೊಟ್ಟ ಬಹುಕಾಲದ ಗೆಳತಿಯರಾದ ಶ್ರೀದೇವಿ, ಪದ್ಮಾಕ್ಷಿಗೆ –

ಸದಾ ನಮ್ಮೊಂದಿಗಿರುವ, ಈ ಕಿರು ಕವನ ಸಂಕಲನವನ್ನು ಹೊರತರುತ್ತಿರುವ ಲೋಹಿಯಾ ಪ್ರಕಾಶನದ ಶ್ರೀ ಚನ್ನಬಸವಣ್ಣ ಅವರಿಗೆ –

ಅಂದವಾಗಿ ರೇಖಾಚಿತ್ರ ಬರೆದುಕೊಟ್ಟ ಕಲಾವಿದ ಶ್ರೀ ಹಜರತ್ ಅಲೀ ಅವರಿಗೆ –

ಮುಖಪುಟ – ವಿನ್ಯಾಸ ಮಾಡಿಕೊಟ್ಟಿರುವ ಶ್ರೀ ಸುಧಾಕರ್ ದರ್ಬೆ ಇವರಿಗೆ –

ಪುಟವಿನ್ಯಾಸ ಮಾಡಿದ ಜಿ.ವಿ. ಧನಂಜಯ ಅವರಿಗೆ –

ಅಂದವಾಗಿ ಮುದ್ರಿಸಿಕೊಟ್ಟಿರುವ ವಿಶ್ವಾಸ್ ಪ್ರಿಂಟ್ಸ್ ಮತ್ತು ಸಿಬ್ಬಂದಿ ವರ್ಗಕ್ಕೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು
ಮೇಟಿಯಿಂ ರಾಟಿ ನಡೆದುದಲ್ಲದೆ -
ದೇಶದಾಟವೆ ಕೆಡಗು ಸರ್ವಜ್ಞ

– ಸರ್ವಜ್ಞ

ಅರ್ಪಣೆ

ರೈತ ಬಂಧುಗಳಿಗೆ

# ಪರಿವಿಡಿ



## ಶರಣು

ಮರೆತೇನೆಂದರೂ ಮರೆಯಲಾರೆ...

ಅನ್ನ ನೀಡಿದ ಕೈಯ ಯಾಕಾರ ಮರೆತೇವು
ಬಳ್ಳ ತುಂಬಿದ ಕೈಯ ಯಾಕಾರ ಮರೆತೇವು

ಕೆಸರು ತುಳಿದವಳ ಬೆವರು ಬಸಿದವಳ
ಯಾಕಾರ ಮರೆತೇವು...

ನೋಯುತ್ತಾ ಹೋದಳು ಸಾಯುತ್ತಾ
ಹೋದಳು
ಮರುಗದೆ ಹೋದೆವು ಕೈಚೆಲ್ಲಿ ಕುಂತೇವು...

ಬಿತ್ತಿದ  ಕೈಗಳಿಗೆ ಶರಣು
ತೂಗಿದ ತೆನೆಗಳಿಗೆ ಶರಣು

ಉರಿದ ಪಾದಕೆ ಶರಣು
ಬಿರಿದ ಪಾದಕೆ ಶರಣು
ಹನಿದಾವೋ...ಮಣ್ಣಿನ ಕಣ್ಣು....

## ರೈತ

ಹಸಿರೆಂಬ ಉಸಿರು ಬೆಳೆವ
ಕಲೆ ಇದೊಂದೇ...
ಯಾವತ್ತೂ ಕನಿಷ್ಠ ಬೆಲೆ
ಸೋಜಿಗ ಪಡುವೆ

ಭೂತಾಯ ಪ್ರೀತಿಯ ಬಲೆಯಲ್ಲಿ
ಸಿಲುಕಿರುವ ಮಿಗ ನಾನು
ಬಿದ್ದು ಒದ್ದಾಡುವೆ...
ಬಿಡಿಸಿಕೊಳ್ಳಲು ಮನಸಿಲ್ಲದೆ!

ಸದಾ ಒಲೆ ಉರಿವುದು
ಸುಖ ನಿದ್ದೆ ಬರುವುದು
ಇನ್ನೇನು ಬೇಕು ನನಗೆ ?





## ರೈತ ಸಂಹಿತೆ

ಓ... ದೇವನೇ ಏನೆಲ್ಲ ಬೆಳೆದೆ
ಗಾಳಿ ಮಳೆ ಇಳೆ ಹೊಳೆ
ಎಲ್ಲವೂ ನೀ ಬೆಳೆದ ಬೆಳೆ

ಗಾಳಿ ಮಳೆ ಬೆಂಕಿಯೇ
ನಚ್ಚಗೆ ಬೆಚ್ಚಗಾಯಿತು
ನಿನ್ನಿಂದ ಇಳೆ !

ಭತ್ತದ ಗದ್ದೆಗಳು
ರಾಗಿಯ ಹೊಲಗಳು
ದ್ರಾಕ್ಷಿಯ ತೋಟಗಳು
ಮರಗಿಡಬಳ್ಳಿಗಳಲಿ
ತೂಗುವ ಹೂವು ಕಾಯಿ
ಹಣ್ಣುಗಳು....
ನಾ ಬಸಿದ ಬೆವರಿಗೆ
ನೀನಿತ್ತ ಪಡಿ!

ನಾ ನಿನ್ನ ಒಕ್ಕಲು
ನೀ ನನ್ನ ದೈವ
ನಿನ್ನ ಆಣತಿಯ ಪಾಲಿಸುವೆ
ಹಸಿದ ಹೊಟ್ಟೆಗಳ ಆಲಿಸುವೆ



## ಓ ರೈತನೇ...

ಭತ್ತ, ಕಬ್ಬು ಗೋಧಿ ರಾಗಿ
ಎಲ್ಲಾ ನಿನ್ನಿಂದಲೇ...

ಹಾಲು ಹೈನು ಬೆಣ್ಣೆ ಎಣ್ಣೆ
ಎಲ್ಲಾ ನಿನ್ನಿಂದಲೇ...

ಸೊಪ್ಪುಸದೆ ಹಣ್ಣು ಕಾಯಿ
ಎಲ್ಲಾ ನಿನ್ನಿಂದಲೇ....

ಗೇದು ತೇದು ಬೆಂದು ಬೆವರಿ
ಉತ್ತು ಬಿತ್ತಿ ಬೆಳೆದು ನೀಡಿರುವೆ

ಮುದ್ದೆ ಮುರಿದ ರೊಟ್ಟಿ ಬಡಿದ
ಈ ಕೈಗಳು ಗಟ್ಟಿಮುಟ್ಟಾಗಿದ್ದರೆ
ಅದು  ನಿನ್ನಿಂದಲೇ...

ತೋಳು ತೊಡೆ ತಟ್ಟಿ
ಜಗಜಟ್ಟಿಯಾಗಿದ್ದರೆ ನಿನ್ನಿಂದಲೇ

ಮೇದಸ್ಸು ಓಜಸ್ಸು ತೇಜಸ್ಸು ಆಯಸ್ಸು
ನೀನಿತ್ತ ಕಾಳು ಕಡಿ
ಉಪ್ಪು ಹುಣಿಸೆ ಮೆಣಸಿನಿಂದಲೇ...

ಎಂದಿನಿಂದಲೂ ಉಣಿಸಿ ತಣಿಸಿ
ಪೊರೆದಿರುವೆ, ನೆಮ್ಮದಿಯ ನಿದ್ದೆ ನಿನ್ನಿಂದಲೇ

ಸರ್ವಶಕ್ತನು ನೀನು
ಭಾಗ್ಯವಂತನು ನಾನು
ಕೈ ಮುಗಿಯುವೆ, ತಲೆಬಾಗುವೆ.





## ಕುಶಲವೆ?

ಹೊಲ-ಗದ್ದೆಗಳು ಹಚ್ಚ ಹಸುರಾಗಿ
ಬಂಗಾರದ ತೆನೆಗಳು ತೂಗಿ-ಬಾಗಿ
ಸಿರಿ ಸಂಪತ್ತು ತುಂಬಿ ತುಳುಕಾಡಿ
ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು,
ಸಕಲ ಪರಿವಾರ, ಹಡಗಿನಂತಹ
ಕಾರುಗಳಲಿ ಹಳ್ಳಿಗೆ ಬಂದಿಳಿದು
ತೋಟದ ಮನೆಯಲ್ಲಿ ನೆರೆದು
ಹಾರಿ ಕುಣಿದು ಗಲಗಲಿಸಿ
'ದೊಡ್ಡಮ್ಮ' ದೇವಿಗೆ ಒಡವೆ-ವಸ್ತು
ಉಡಿಸಿ ತೊಡಿಸಿ ಮೆರೆಸಿ
ಊರ ಮಂದಿಯ ಕಣ್ಣು ಉರಿಸಿ
ಹಬ್ಬದೂಟವ ಮುಗಿಸಿ
ಹೀಗೆ ಬಂದು ಹಾಗೆ ಹೋಗಿರಲು
ಮನೆ ಹಿರಿಯ, ಹೊಲದೊಡೆಯ
ಸವಿ ಗಳಿಗೆಗಳ ಮೆಲುಕಾಡಿ ಮಲಗಿರಲು.....
ಮುದಿಯಾಗಿ ಎಂದೋ...
ಕಸಾಯಿಖಾನೆ ಸೇರಿದ
ಸೊರಗಿದ ಜೋಡೆತ್ತುಗಳು
ಕನಸಿನಲಿ ಬಂದು ನಿಂದು
ಕುಶಲವೆ? ಎಂದು ಕೇಳಿದವು !

# ಹೊಸ ಒಡಂಬಡಿಕೆ

ಹೊಲ-ಗದ್ದೆಗಳಲ್ಲಿ
ಬಂಗಾರ ಬೆಳೆಯಲು
ಕಾದು ನಿಂತವರೆ...
ಒಪ್ಪಂದ ಮಾಡಿಕೊಳ್ಳಲು
ಮನೆ ಬಾಗಿಲಿಗೆ ಬಂದವರೆ...
ಹೇಳುವರು ಎಲ್ಲಾ ನಮ್ಮ ಸುಖ-ಸಂತೋಷಕ್ಕೆ !

ಸಹಿ ಮಾಡುವ ಮುನ್ನ ಭೂತಗನ್ನಡಿ
ಹಿಡಿ.. ಏನಿದೆಯೊ ಒಳಗೆ ? ಅಕ್ಷರದ ಗಡಿಗೆ !
ಹಿಂಜರಿದು ಹೇಳುವನು ಹಿರಿಯ ಅಡಿಗಡಿಗೆ!

ಒಲ್ಲೆ, ನಾನೊಲ್ಲೆ, ನಾ ಬಲ್ಲೆ....
'ಗುಡಿಸಿ ಗುಡ್ಡೆ ಮಾಡಿ' ಒಗೆದರೆ?
'ಬಡವ ನೀ ಮಡಗಿದಂಗಿರು 'ಎಂದರೆ?
ತಗ್ಗಲಾರೆವು ಬಗ್ಗಲಾರೆವು
ಹೇಳಿದರವರು ಕಡ್ಡಿ ಮುರಿದಂಗೆ





## ಪುನರುಚ್ಚರಿಸಬೇಕು

ಏನು ಹೇಳಲಿ ? ಮಹಾ ಜನತೆ
ತೆಪ್ಪಗಿದೆ ಬೆಪ್ಪಗಿದೆ

ಏನು ಹೇಳಲಿ ?
ಮಹಾಜನತೆ
ಚಪಲ ಚಿತ್ತರು
ಕಪಟ ಭಕ್ತರು

ನೀಡಿದ್ದೆಲ್ಲವೂ ಮಂಡಿಗೆ
ಎಂದು ಮೆಲ್ಲುತಿಹರು
ಮೈಮರೆತಿರುವರು

ಉಪ್ಪು ಸಪ್ಪೆಯಾಗಿದೆ
ಕಬ್ಬು ಕಹಿಯಾಗಿದೆ
ತಪ್ಪೂ ಒಪ್ಪಿಗೆಯಾಗಿದೆ

ಅಹಾ! ಏನು ದರ್ಪ ಎಷ್ಟು ಗರ್ವ
ಮಹಾಜನತೆ ಮೆಚ್ಚಿ ಅಚ್ಚೆಮಾಡಿ
ಕೊಂಡಾಡಿ ತಾನು
ಪದತಲದಲ್ಲಿ ಬಿದ್ದು ಒದ್ದಾಡಿದೆ!

ಏನು ಹೇಳಲಿ?
ಉತ್ತು ಬಿತ್ತಿ ಬೆಳೆದವನೇ
ಕಿತ್ತೊಗೆಯಬೇಕು....
ಗಟ್ಟಿಗುಂಡಿಗೆ ಬೇಕು !

ಏನು ಹೇಳಲಿ?
ಉತ್ತು ಬಿತ್ತಿ ಬೆಳೆವಾಗ
ಎಚ್ಚರವಾಗಿರಬೇಕು..
ಹಳೆಯ ಮಾತು, ಭುವಿಗೆ ಹಳತು
ಪುನರುಚ್ಚರಿಸಬೇಕು!

# ನೀವು ತಿನ್ನುವುದು ರೊಟ್ಟಿಯೇ ಆಗಿದ್ದರೆ...

ಭತ್ತ, ಗೋಧಿ, ರಾಗಿ, ಜೋಳ
ಬೆಳೆಯುವ ಈ ಜನರು...
ಹೆಚ್ಚೆಂದರೆ ಹೊಟ್ಟೆ-ಬಟ್ಟೆಗೆ
ಗೇದು, ಸಂಪಾದಿಸುವರು...
ಮಕ್ಕಳು ಓದಿ, ಬರೆದು ನೆಟ್ಟಗೆ ಬಾಳಲಿ
ಎಂದು ಕನಸು ಕಾಣುವರು !
ಗಾಳಿ ಮಳೆ ಬಿಸಿಲು ಚಳಿಗೆ
ಹೆದರುವರೆ? ಬೆದರುವರೆ?

ಗೋಧಿ, ಭತ್ತ, ರಾಗಿ, ಜೋಳದ
ತೆನೆಗಳಂತೆ ಹಾಲು ತುಂಬಿದ
ತಾಯಿ ಗುಣದವರು....
ಕೆಟ್ಟರೂ, ಸುಟ್ಟರೂ ಮೊಲೆ ಉಣಿಸುವರು !

ಜಗತ್ತಿನ ಸಿರಿವಂತರ ಪಟ್ಟಿಯಲ್ಲಿ
ಎಂದಾದರೂ ಇದೆಯೆ ಇವನ ಹೆಸರು?
ನೂರಂತಸ್ತಿನ ಮನೆ, ವಿಮಾನ, ಹೆಲಿಕಾಪ್ಟರು
ಎಂದಾದರೂ ಹೊಂದಿರುವರೆ ಇವರು?
ಮಣಗಟ್ಟಲೆ ಬಂಗಾರ, ಬೆಳ್ಳಿ,
ಕಂತೆ ಕಂತೆ ನೋಟು
ಎಂದಾದರೂ ಕೂಡಿಟ್ಟಿರುವರೆ ಇವರು ?
ಮೋಸ, ವಂಚನೆ, ಭ್ರಷ್ಟಾಚಾರ... ಎಸಗಿ ಓಡಿ
ಹೋದವರ ಪಟ್ಟಿಯಲ್ಲಿ
ಎಂದಾದರೂ ಸೇರಿರುವರೆ ಇವರು?

ಸಾಲ, ಕಳಪೆ  ಬೀಜ–ಗೊಬ್ಬರ,  ಬೆಳೆನಾಶ,ಜಪ್ತಿ,
ಇವೇ ಇವರ ಒಡನಾಡಿಗಳು....
ಹೆಚ್ಚೆಂದರೆ ತಮ್ಮ ಜಮೀನಿನಲ್ಲೇ ತಾವು ನೆಟ್ಟ
ಮರಗಳಿಗೇ ನೇಣು ಹಾಕಿಕೊಳ್ಳುವವರು...

ಮೇಟಿ ವಿದ್ಯೆಯೊಂದನೇ ನೆಚ್ಚಿರುವ ಇವರು
ನಿಮ್ಮ ಕೋಟಿ ವಿದ್ಯೆಯ
ಪ್ರಯೋಗ ಪಶುಗಳಾಗಲೊಲ್ಲರು...
ಬೆಳೆದು ಕೊಟ್ಟವರು, ಪಟ್ಟು ಹಿಡಿದು
ತಾ ಬಯಸಿದ ಬೆಳೆ ಬೆಳೆಯುವ ಹಕ್ಕು,
ಬೆಳೆದ ಬೆಳೆಗೆ ಬೆವರಿನ ಬೆಲೆ ಕೇಳುತಿಹರು..
ನೀವು ತಿನ್ನುವುದು ರೊಟ್ಟಿಯೇ ಆಗಿದ್ದರೆ
ಸಿಟ್ಟಾಗದೆ ಆಲಿಸಿರಿ.. ಬಿಟ್ಟುಬಿಡಿ ಪೊಗರು !



## ಈ ಭೂಮಿ....

ರೊಕ್ಕ ಟಂಕಿಸಬಹುದು
ಭತ್ತ ಟಂಕಿಸಲಾಗುವುದೆ?

ಮಳೆ ಗಾಳಿ ಬಿಸಿಲು
ಸೋಕಿ ಬೆಳೆ

ಈ ಭೂಮಿ ಸಕಲ
ಜೀವ ಕೋಟಿಗಳ ತಾವು

ಹಕ್ಕಿ ಕೂಡ ಹಿಕ್ಕೆ ಹಾಕಿ
ಹಣ್ಣ ಬೆಳೆವುದು ಗೊತ್ತಿಲ್ಲವೆ?

ಜೇನು ದುಂಬಿ ಇರುವೆ...
ಹೂವ ಬೆಳೆವುದು ಗೊತ್ತಿಲ್ಲವೆ?

ಈ ಭೂಮಿ ಸಕಲ
ಜೀವ ಕೋಟಿಗಳ ರೊಟ್ಟಿ
ಮನುಜನೇ ನಿನ್ನದೇನು ಹೆಗ್ಗಳಿಕೆ ?
ಹಂಚಿಕೊ ಸಮನಾಗಿ
ಕೊನೆತನಕ ಕಾಯಲಿ
ಭೂತಾಯ ಹರಕೆ

# ಕಡೇ ಮಾತು...

ಬೆಳೆಯುವವನಿಗಿಂತ
ಅಳೆಯುವವನದೇ
ಕಡೇ ಮಾತಾದರೆ ಹೇಗೆ ?

ಕಾಳುಕಡಿ ತುಂಬಿಕೊಂಡು
ಬಂದಿದೆ ಚಕ್ಕಡಿ
ವಾಲಾಡಿಕೊಂಡು ತಕ್ಕಡಿ
ವಸಿ ತಡಿ, ವಸಿ ತಡಿ
ಎಂದರೆ ಹೇಗೆ ?

ಅನ್ನ ಉಂಬೋರ ನುಡಿಗಟ್ಟೇ ಬೇರೆ
ಚೆನ್ನ ತಿಂಬೋರ ಒಳಗುಟ್ಟೇ ಬೇರೆ
ತಿಳಕೊಂಡೆ ಅಂದರೂ ತಿಳಿವಲ್ದು
ಯಾವುದು ದಿಟ ಯಾವುದು ಸಟೆ?



# ಬೆವರೇ ನೀರು !

ಬರಗಾಲದಲ್ಲೂ....
ರಾಮ ದೂಮ ಚೋಮ
ನೆಲ ಬಗೆದು
ಬೆವರ ಹನಿಸಿ ಗಿಡ ನೆಟ್ಟರು

ಬಸಿದ ಬೆವರನೆ ಕುಡಿದು
ಗಿಡಗಳು ಬೇರು ಬಿಟ್ಟವು.

ಭರ ಭರ ಬೆಳೆದು
ಬಾನಿಗೆ ಕೈಚಾಚಿ
ಮೋಡಗಳ ಕರೆದವು

ಮಳೆ ಸುರಿದು ಹಳ್ಳಕೊಳ್ಳ
ತುಂಬಿ ಹರಿದುದ್ದಕ್ಕೂ....
ಬಲೆಬೀಸಿ ಸೆಳೆದುಕೊಂಡವು
ಎದ್ದುಬಿದ್ದು ಕಡಲ ಅಲೆಗಳು

ಬೆವರಿನಿಂದಲೆ ಮಳೆ
ಬೆವರಿನಿಂದಲೆ ಹೊಳೆ
ಬೆವರಿನಿಂದಲೆ.....
ಕಳೆ–ಬೆಳೆ–ಇಳೆ–ಬಾಳ್ವೆ

ಬೆವರೇ ನೀರು....
ನೂರು ತಲೆಮಾರು!

ನಿನ್ನೊಳಗೂ ನದಿಯಿದೆ
ಒಮ್ಮೆ ಇಳಿದು ನೋಡು !



# ರೈತ ಮತ್ತು ಕವಿ

ಕವಿಯೂ ರೈತನಂತೆಯೇ
ಹುಲುಸಾಗಿ ಬೆಳೆಯುವನು ಕವಿತೆ

ರೈತನೋ ನಿಸ್ವಾರ್ಥಿ...
ಬೆಳೆಯುವುದವನಿಗೆ ರೂಢಿ!
ಸಾಕಾಗುವುದು ಹೊಟ್ಟೆ-ಬಟ್ಟೆಗೆ
ಒಮ್ಮೊಮ್ಮೆ ಬರಗಾಲ
ಅನಿರೀಕ್ಷಿತವಾಗಿ  ಬಂಪರ್ ಬೆಳೆ

ಕವಿ ಗಾಳಿಯ ದಿಕ್ಕಿಗೆ ಮುಖವೊಡ್ಡಿ ನಿಲ್ಲುವಂತೆ
ರೈತನೂ ಆಕಾಶ ನೋಡುವನು, ಕಾಯುವನು
ಇದೆಯೇ ಮಿಂಚು ಗುಡುಗಿನ ಸೂಚನೆ ?

ಅಕ್ಕಿ, ಗೋಧಿ, ರಾಗಿಯಂತೆಯೇ
ಕವಿತೆ ಕೂಡ ಅಗ್ಗ...
ಮಾರಲಾಗದೆ ರೈತ
ನಡು ಬೀದಿಯಲ್ಲಿ ಚೆಲ್ಲಿದಂತೆ
ಕೀಳದೆ ಗಿಡದಲ್ಲೇ ಬಿಟ್ಟುಬಿಡುವಂತೆ
ಕವಿಯೂ ಸುಮ್ಮನೆ ಬರೆದಿಡುವನು
ಪ್ರಕಟಿಸಲಾಗದೆ !

ಗೋದಾಮುಗಳಲ್ಲಿ ಅಕ್ಕಿ, ರಾಗಿ
ಕುಟ್ಟು ಹಿಡಿದು ನುಚ್ಚಾದ ಹಾಗೆ
ಕವಿತಾ ಸಂಕಲನಗಳೂ ದಾಸ್ತಾನಾಗಿ
ಇಲಿ–ಹೆಗ್ಗಣಗಳ ಪೊರೆದಿವೆ!

ಆದರೂ ಲೋಕದಲ್ಲಿ
ರೈತನಿಗೂ ಕವಿಗೂ
ಗರಿಷ್ಠ ಗೌರವ, ಕನಿಷ್ಠ ಬೆಂಬಲ !
ಹಸಿವೂ ರಸವೂ
ಸಾಮಾನ್ಯ, ಜಗದ್ಮಾನ್ಯ!

# ರೈತ ಮಗು

ಎಲ್ಲಾ ಬೆಳೆದರೂ ನೀನು
ದೊಡ್ಡವನಾಗಲೇ ಇಲ್ಲ...
ಇನ್ನೂ ಮಗು !

ಎಲ್ಲಾ ಸರಸರ ವಿಮಾನ ಹತ್ತಿ
ಹಾರಿ ಹೋಗುವಾಗ
ಚಿಟ್ಟೆಯತ್ತ ಕೈದೋರಿ
ತ...ತ... ಎಂದು ಉಗ್ಗುತ್ತಾ ಹಿಗ್ಗುತ್ತಾ
ಅಂಬೆಗಾಲನು ಇಟ್ಟು ಹೂವಿನಂತೆ
ಕಣ್ಣರಳಿಸಿ ನೋಡುವೆ... ಇನ್ನೂ ಮಗು !

ವಿದ್ಯೆ ಬುದ್ಧಿ ಸಿರಿ–ಸಂಪತ್ತು,
ಶಕ್ತಿ–ಯುಕ್ತಿಯ
ಬಲದಿಂದ ಎಲ್ಲಾ ಬಲಿತು
ಕಾದಾಡಲು ಕಲಿತಿರಲು ನೀನಿನ್ನೂ
ತಲೆಯ ಮೇಲೆ ಮಣ್ಣು ಹುಯ್ದುಕೊಂಡು
ಚಪ್ಪಾಳೆ ತಟ್ಟಿ ಮಣ್ಣಿನಲಿ ಬಿದ್ದು ಎದ್ದು
ಹೊರಳಾಡಿ ಆಟವಾಡುತ್ತಿರುವೆ...
ಎಷ್ಟು ಕರೆದರೂ ಬರಲೊಲ್ಲೆ !
ಥೋ.. ಪೆದ್ದ ಮಗು !
ಪಚ್ಚೆ–ಪೈರು ನಿನ್ನ ನಗು !



## ಪೊರೆಯುವೆ

ಇಟ್ಟಂಗೆ ಇರುವೆ
ಕಟ್ಟ ಕಡೆಯವನಾಗಿರುವೆ..

ತಿಪ್ಪ ತಿಪ್ಪ ಹೆಜ್ಜೆಗಳನಿಟ್ಟು
ಭೂತಾಯ ಮೈಮೇಲೆ
ಓಡಾಡಲೆಂದೇ
ಜನುಮ ಪಡೆದಿರುವೆ

ಜೋಡೆತ್ತು, ನೀರೊತ್ತು...
ಮೂರೊತ್ತು
ಇವಳ ಸೆರಗಿನ ತುದಿ ಹಿಡಿದು
ಕಾಲಾಡಲೆಂದೇ
ಈ ತನಕ ಬದುಕಿರುವೆ

ಮಡಿದರೇನಂತೆ ?
ಮುಚ್ಚುವರು, ಹೊಚ್ಚುವರು
ಮರಳುವೆನು ಮಣ್ಣಿಗೆ

ಸಿಡಿಲು ಕಿಡಿಗೇಡಿ, ಬಡಿದು
ಮಿಡಿಯಲು ನಾಡಿ
ಹಚ್ಚಹಸಿರು
ಹುಲ್ಲಾಗಿ ಚಿಗುರುವೆ !

## ತಂಗಾಳಿ ನಾನು....

ತೆನೆಗಳು ತೂಗಿರೆ
ಚಂದಿರ ನಗುತಿರೆ
ತಂಗಾಳಿ ನಾನು
ಕೈಕಾಲು ಬೀಸುತ
ನಡೆವೆ, ಓಡುವೆ
ರೈತನು ಇರುವೆಡೆ...
ಅಂಗಳದಲಿ ಮಗು
ನಿದಿರೆಗೆ ಸಂದಿದೆ
ಸಣ್ಣಗೆ ದೀಪ ತಾನೆ ಬೆಳಗಿದೆ
ಬಾಗಿಲು ತೆರೆದಿದೆ
'ಬಾ' ಎಂದು ಕರೆದಿದೆ
ಸುಳಿದಾಡುವೆ ಒಳಗೆ ಹೊರಗೆ
ಜ್ಯೋತಿ ಬೆವರಿರಲು ಬೀಸಿ ಬೀಸಣಿಗೆ
ಹೊತ್ತು ತಂದಿರುವ ಹೂವಿನ ಕಂಪನು
ಹಟ್ಟಿಯ ಮೂಲೆಗೆ ಇಟ್ಟು ಹೋಗುವೆ!





## ‘ಇರುವೆ’

ಇರದ ಜಾಗವಿಲ್ಲ....
ಹರಿವೆ ನದಿಯಂತೆ,
ಉದುರುವೆ ಮಳೆಯಂತೆ
ನೀನಿರುವೆ, ಕಾಣುವೆ, ಕಾಡುವೆ
ಎಲ್ಲೆಡೆ ದೇವರಂತೆ !

ನಿನ್ನ ಗೂಡು, ಗೋದಾಮು, ಕಾರ್ಯಪಡೆ
ಶಿಸ್ತು ಶ್ರದ್ಧೆ, ಮುನ್ನೋಟಕ್ಕೆ ಎಣೆಯುಂಟೆ?

ಸಕ್ಕರೆಯ ರಥ ಎಳೆಯುತ್ತಿರುವೆ ಉಘೇ
ಉಘೇ ಎಂದು ಯಾವ  ಜಾತ್ರೆಗೆ ?

ಅಗೆದಷ್ಟೂ ಮೊಗೆದಷ್ಟೂ ಮೊಟ್ಟೆ
ಎಷ್ಟು ಇತಿಹಾಸಗಳ ಅಗಿದು
ಹೊಟ್ಟೆ ಹೊರೆದಿರುವೆಯೋ...

ಚುಚ್ಚಿ, ಕಚ್ಚಲು ಬೆಚ್ಚಿ ಬೀಳುವೆ
ಹುಚ್ಚನಂತಾಡುವೆ ಹೊಸಕಿ ಹಾಕುವೆ
ಕಡೆಗಣಿಸಿ ಎಚ್ಚರಿಕೆ !

ಅದೆಷ್ಟೋ ಸಾಮ್ರಾಜ್ಯಗಳು
ಬಿದ್ದವೋ ಎದ್ದವೋ
ಅತಳ ವಿತಳ ಪಾತಾಳಗಳಲ್ಲಿ
ಅಡಗಿರುವ ನೀನು
ಅಡಿಗಲ್ಲು ನಡುಗುವುದ  ಮುಂದಾಗಿ ಕಾಣಬಲ್ಲೆ !
ಅದರ ಬಿರುಕಿನಲೂ ಓಡಾಡಬಲ್ಲೆ ...!

ದುಡಿಯುವೆ, ಮಡಿಯುವೆ...
ಇದ್ದೂ ಇಲ್ಲದಂತಿರುವೆ...
ಎಲ್ಲಡಗಿರುವೆ ? ಯಾವ ಹೊಲದಲ್ಲಿರುವೆ ?
ಯಾವ ಬೀಜದಲ್ಲಡಗಿರುವೆ ?
ಕೋಟಿ ತೆನೆ ತೂಗಿ ಪಟ ಪಟ ಹಾರಿಸಿರುವೆ
ಹಸಿರು ಬಾವುಟ ಜಗದೆಲ್ಲೆಡೆ...

'ಕಾಲಜ್ಞಾನಿ' ನೀನು
ನುಡಿ ಕಾರಣಿಕ...ಸಮಯ ಬಂದಿದೆ!

# ರೊಟ್ಟಿ ಮತ್ತು ಬೆಣ್ಣೆ (ಒಂದು ಗಪದ್ಯ)

ಅವಳು ಒಳಗೆ ರೊಟ್ಟಿ ಬಡಿಯುತ್ತಿದ್ದಳು.
ಅವನು ಹೊರಗೆ ಬೆಳದಿಂಗಳ ಸಮುದ್ರದಲ್ಲಿ ತೆನೆಗಳು
ಸುಳಿಗಾಳಿಯೊಡನೆ ಆಟವಾಡುತ್ತಿರುವುದನ್ನು
ನೋಡುತ್ತಾ ಕುಂತಿದ್ದನು.
ಬೆಳೆ ಬಂಗಾರವಾದರೆ ಈ ಸಲವಾದರೂ ಮನೆಗೆ ಹೆಂಚು
ಹೊದಿಸಬೇಕು ಅಂದುಕೊಂಡನು.

ಅಂಗಳದಲ್ಲಿ ಆಟವಾಡಿಕೊಂಡಿದ್ದ ಮಕ್ಕಳು ಆಗಾಗ್ಗೆ
ತಾಯಿಯತ್ತ ಕಣ್ಣು ಹಾಯಿಸುತ್ತಿದ್ದವು.
ಎಲ್ಲಕ್ಕಿಂತ ಚಿಕ್ಕದು –ನಾಕು ವರುಷದ ಕೂಸು
'ಅಮ್ಮಾ ಹಸಿವು' ಎಂದಿತು.
ಹುಡುಗಿ ಅಂಗಳದಲ್ಲಿ ಊಟದ ತಟ್ಟೆಗಳನ್ನು ಹಾಕಿದಳು.
ಅವಳ ತಮ್ಮ ನೀರಿನ ಪುಟ್ಟ ಕೊಡ–ಲೋಟ ತಂದಿರಿಸಿದನು.

ತಾಯಿ ರೊಟ್ಟಿ –ಪಲ್ಲೆ–ಮೊಸರಿನ ಪುಟ್ಟ ಕುಡಿಕೆ ಎತ್ತಿಕೊಂಡು
ಬಂದು ಎಲ್ಲರನ್ನೂ ಊಟಕ್ಕೆ ಕರೆದಳು.
ಆಕೆ ಗಂಡನಿಗೆ ಎರಡು ರೊಟ್ಟಿ, ಮೂವರು ಮಕ್ಕಳಿಗೆ
ಒಂದೊಂದು ರೊಟ್ಟಿ ನೀಡಿದಳು.
ಒಂದು ಸವುಟು ಸೊಪ್ಪು ಬೇಳೆಯ ಪಲ್ಲೆ, ಹಸಿಖಾರ, ಒಂದು
ತುಂಡು ಈರುಳ್ಳಿ ತಟ್ಟೆಯಲ್ಲಿ ಮಡಗಿದಳು.
ಸಣ್ಣ ಕೂಸು ತನ್ನ ರೊಟ್ಟಿಯಲ್ಲಿ ಒಂದು ತುಂಡು ಮುರಿದು
ಅಲ್ಲೇ ಕೂತು ಬಾಲವಾಡಿಸುತ್ತಿದ್ದ ಅವರ ನಾಯಿಗೆ ನೀಡಿತು.
ಹಸಿಖಾರಕ್ಕೆ ರೊಟ್ಟಿ ಅದ್ದಿ ಬಾಯಿಗಿಟ್ಟು ಜಗಿದು ಕೂಸು
'ಅವ್ವ... ಖಾರ' ಅಂತು. 'ಅವ್ವ... ಬೆಣ್ಣೆ' ಅಂತು.

ತಾಯಿ ನಕ್ಕು, ಆಗಸಕ್ಕೆ ಕೈ ಹಾಕಿ ಒಂದಿಷ್ಟು ಬೆಣ್ಣೆ
ಬಳಿದುಕೊಂಡು ಕೂಸಿನ ರೊಟ್ಟಿಯ ಮೇಲೆ ಇರಿಸಿ
'ತಗೋ ಹಚ್ಚಿಕೋ' ಎಂದಳು.
ಕೂಸು ಬೆರಗಿನಿಂದ ಆಕಾಶದತ್ತ ಮುಖ ಮಾಡಿ ತೇಲುವ
ಬೆಣ್ಣೆಯ ಮುದ್ದೆ ನೋಡುತ್ತಿರುವಾಗಲೇ
ತಾಯಿ ಪಕ್ಕದಲ್ಲಿದ್ದ ಕುಡಿಕೆಯಿಂದ ಒಂದು ಚಮಚ
ಗಟ್ಟಿಮೊಸರನ್ನು ತೆಗೆದು ಕೂಸಿನ ರೊಟ್ಟಿಯ ಮೇಲೆ
ಹಾಕಿದಳು.
ಕೂಸು ರೊಟ್ಟಿಗೆ ಮೊಸರನ್ನು ಹಚ್ಚಿಕೊಂಡು 'ಬೆಣ್ಣೆ',
'ಬೆಣ್ಣೆ!' ಎಂದು ತಲೆಕುಣಿಸುತ್ತಾ ತಿನ್ನತೊಡಗಿತು.

ಇದನ್ನೆಲ್ಲ ನೋಡುತ್ತಿದ್ದ ಗಂಡ-ಮಕ್ಕಳು ನಕ್ಕರು.
ಕೂಸೂ ನಕ್ಕಿತು. ತಾಯಿಯೂ ನಕ್ಕಳು.
ಚಂದಿರನಿಗೆ ನಗೆ ಉಕ್ಕುಕ್ಕಿ ಬಂದು ಭೂಮಿಗೆ ಚೆಲ್ಲಿತು.



## ಹೇಳು...

ದೊರೆ ಕಿವುಡನಾಗಿದ್ದಾನೆ
ನಮ್ಮ ಕೂಗು ಅವನನ್ನು ತಾಕುತ್ತಿಲ್ಲ!

ದೊರೆ ಕುರುಡನಾಗಿದ್ದಾನೆ
ನಮ್ಮ ಪಡಿಪಾಟಲು ಅವನಿಗೆ ಕಾಣುತ್ತಿಲ್ಲ !

ದೊರೆ ಮೂಗನಾಗಿದ್ದಾನೆ...
ತನ್ನ ದನಿಯನ್ನೇ ಒತ್ತೆ ಇಟ್ಟು ಬಿಟ್ಟದ್ದಾನೆ !

ಅವನು ನಮ್ಮನ್ನು ಮುಟ್ಟಲಾರ...
ಬಾಚಿ ತಬ್ಬಿಕೊಳ್ಳಲಾರ...
ಹತ್ತಿರ ಕೂಡ ಬರಲಾರ....
ಏಕೆಂದರೆ
ಮುಳ್ಳಿನ ಬೇಲಿ ಹಬ್ಬಿಸಿದ್ದಾನೆ....
ಕಬ್ಬಿಣದ ಮೊಳೆಯ ಹಾಸು ಹಾಸಿದ್ದಾನೆ
ತಡೆಗೋಡೆ ಬೇರೆ ಎಬ್ಬಿಸಿದ್ದಾನೆ..

ಮುಟ್ಟಬಾರದೆಂದೇ...
ದೊಡ್ಡ ಕಂದಕವನ್ನೇ ತೋಡಿಕೊಂಡಿದ್ದಾನೆ ?!

ಹೇಳು ದೊರೆ...
ನೀನು ಯಾರಿಗೆ ವಚನಬದ್ಧನಾಗಿರುವೆ?
ಯಾರ ಹಂಗಿಗೆ ಸಿಲುಕಿ ಹೀಗೆ ಒದ್ದಾಡುತಿರುವೆ?

ಹೇಳು... ನೀನೂ ಅಸಹಾಯಕನೆ?
ಹೃದಯವಿಲ್ಲದ ಮನುಷ್ಯ ಈ ಜಗದಲ್ಲೇ ಇಲ್ಲ!
ನಾ ನಿನ್ನ ಮುಟ್ಟಬೇಕಿದೆ.....
ನಿನ್ನೊಂದಿಗೆ ಮಾತನಾಡಬೇಕಿದೆ....
ಆಗಲೇ ಹೊಸ ಆಲೋಚನೆ, ವಿಮೋಚನೆ ...

# ನಾಳೆ

ನಾಳೆ ಕೊಯ್ಲಾಗುವುದು
ಹಕ್ಕಿಗಳಿಗೆ
ಹುತ್ತರಿ ಹಾಡು
ವಿದಾಯ ಹೇಳುವುದು

ತೆನೆಗಳೊಡನೆ
ಆಟವಾಡಲು ಬರುವ
ಸುಳಿಗಾಳಿ ನಿರಾಶೆಯಿಂದ
ಮರಳಬೇಕಾಗುವುದು

ಇನ್ನಿಲ್ಲಿ ನರಿ ಊಳಿಡದು
ಇಲಿ ಬಿಲ ತೋಡದು
ಕವಣೆ ಬೀಸುವ
ಹುಡುಗರಿಗಿನ್ನು ಕೆಲಸವಿರದು

ಬೆದರು ಬೊಂಬೆಯೂ
ನಾಳೆ ತನ್ನ
ವೇಷ ಕಳಚಿಡುವುದು
ಸದ್ದು ಗದ್ದಲ ಸಂಭ್ರಮ
ತನಗೆ ತಾನೆ ಇಲ್ಲವಾಗುವುದು

ಘನವಾದ ಮೌನ
ಇಡೀ ಹೊಲವ
ಆವರಿಸುವುದು

# ಎರಡು ಬೆಳೆಗಳು

ಭತ್ತ ರಾಗಿ ಗೋಧಿ ಕಬ್ಬು ಕಡಲೆ
ಮೆಂತೆ ಮೆಣಸು ಜೀರಿಗೆ ಸಾಸಿವೆ
ಸೊಪ್ಪು ಹೀರೆ ಹಾಗಲ ಸೇಬು ಸೀಬೆ
ಏನೆಲ್ಲಾ ಬೆಳೆಯಲು...
ಇಳೆ–ಮಳೆ–ಗಾಳಿ–ಬಿಸಿಲು ಇಷ್ಟು ಸಾಕು!
ತಾನೇ ಬೆಳೆವುದು ಹಲವು ಗಿಡ ಮರ
ಬಳ್ಳಿಗಳು...
ಗೆಡ್ಡೆಗೆಣಸು, ಅಣಬೆ ಸುಮ್ಮನಿದ್ದರೂ!

ನಾವು...
ನೀವು ಬೆಳೆದುದನ್ನು ಕೊಂಡುಕೊಳ್ಳಲು
ಹಣ ಬೆಳೆಯುವೆವು...
ದೇಹ ಬುದ್ಧಿ ಜಾಣ್ಮೆ ಕೌಶಲ್ಯ ಕುಟಿಲತೆ
ಜಟಿಲತೆ ಭಾಷೆ ಆಸೆ ಇಷ್ಟು ಸಾಕು!
ಮನುಜನ ನೆಮ್ಮದಿ–ನಿದ್ದೆ
ಊಡಿದಷ್ಟೂ–ಹೂಡಿದಷ್ಟೂ
ಸಾವಿರ ಪಟ್ಟು ದ್ವಿಗುಣಗೊಳ್ಳುವುದು
ಭೂಮಂಡಲವನೇ
ಕೊಂಡುಕೊಳ್ಳಬಹುದು!

## ಜಾಗತೀಕರಣದ ಹೊಸ್ತಿಲಲ್ಲಿ ನಿಂತಿರುವ ರೈತನಿಗೊಂದು ಕಿವಿಮಾತು

ಯಾವಾಗ ನೋಡಿದ್ರೂ
ಜರಿಶಾಲು, ರೇಷ್ಮೆಪೇಟ
ದೀಪಾ-ಧೂಪಾ
ಹೂವು-ಹಾರ ಜೊತೆಗೆ
ನಾಯಕರ ನಗೊ ಮುಖ
ಹೊತ್ಕೊಂಡು ಬರ್ತಾ ಇದ್ದ
ಪೇಪರ್ ನಾಗೆ ನಿನ್ನ
ಸುದ್ದಿನೂ ಓದ್ದೇ ಕಣಪ್ಪಾ..

ದಿಕ್ಕಿಲ್ಲದಂಗೆ ರಾಶಿ ಬಿದ್ದಿದ್ದ
ಟೊಮೊಟೊ, ಆಲೂಗೆಡ್ಡೆ, ಮೆಕ್ಕೆಜೋಳದ
ಜತಗೆ ಕಂಗಾಲಾಗಿ ಕೂತಿದ್ದ
ನಿನ್ನ ಚಿತ್ರಾನೂ ಮುಖಪುಟದಾಗೆ
ನೋಡ್ದೆ ಕಣಪ್ಪಾ

ಅಲ್ಲಾ ಕಣಪ್ಪಾ..
ಭಾರತಾಂಬೆಯ ಬೆನ್ನೆಲುಬು
ಅಂತ ಯಾಮಾರಿ ಕುಂತಿದ್ಯಲ್ಲಾ
ಈಗ ನೋಡು..
ನೀ ಯಾರ ಅಂತ
ಕೇಳೋರು ಇಲ್ಲ..

ನೀ ಹತ್ತು ಪೈಸೆಗೆ ಮಾರೋದನ್ನ
ಹತ್ತು ರೂಪಾಯಿಗೆ ತಕ್ಕೊಳೋ
ನಾ ಹೇಳ್ತೀನಿ ಕೇಳು..

ನೀ ಹೆದರಬೇಡ
ಇಲಿ ಪಾಷಾಣ
ಕೀಟ ನಾಶಕ ಕುಡ್ದು
ಜೀವ ತಕ್ಕೊಬ್ಯಾಡ

ಭೂಮಿ–ಕಾಣಿ, ಮಳೆ–ಬೆಳೆ
ಎಲ್ಲಾ ಮರತು ಬಿಡು
ನೀ ಬಿತ್ತೋದೂ ಬ್ಯಾಡ
ನೀ ಬೆಳೆಯೋದೂ ಬ್ಯಾಡ
ಕೈಕೆಸರು ಮಾಡಿಕೊಳ್ಳೋದೂ ಬ್ಯಾಡ
ನುಸಿಪೀಡೆ, ಕೀಟಬಾಧೆ, ಪೇಟೆಧಾರಣೆ
ಅಂತ ತಲೆಕೆಡಿಸಿಕೊಳ್ಳಬ್ಯಾಡ
ಅಕ್ಕಿ, ರಾಗಿ, ಕೊತ್ತಿಮಿರಿ, ಕರಿಬೇವು
ಎಲ್ಲಾ ಅಮೇರಿಕಾದಿಂದ ಬರುತ್ತೆ
ನೀ ಸುಮ್ಕಿದ್ದು ಬಿಡು ಆರಾಮ..

ಆ ಹಳೆ ಪಂಚೆ
ಹರಕಲು ಚಡ್ಡಿ
ಹವಾಯಿ ಚಪ್ಪಲಿ
ಮೋಟು ಬೀಡಿ ಮೊದ್ಲು ಬಿಸಾಕು
ಜೀನ್ಸ್ ಪ್ಯಾಂಟು, ರಂಗೀಲಾ ಷರಟು
ಮೊದ್ಲು ತೊಟ್ಕೊ

ಪಿಜ್ಜಾ ತಿನ್ನು, ಕೋಲಾ ಕುಡಿ
ಪ್ಯಾಕ್ ನಲ್ಲಿ ಮಡಗಿರೊ
ಚಿಕನ್ನು, ಮಟನ್ನು ತಿಂದು
ಪಾಪು, ರ್‍ಯಾಪು ಕೇಳ್ತಾ
ಟ.ವಿ.ನಲ್ಲಿ W.W.F ನೋಡ್ತಾ
ಮೊಬೈಲ್ ನಲ್ಲಿ ಕಷ್ಟ–ಸುಖ

ಇಚಾರಿಸ್ತ ಸುಮ್ಕಿದ್ದು ಬಿಡು ಆರಾಮು..
ಹಾಂ.. ಹಾಗೆ.. ಹಾಗೆ..
ನೋಡ್ತಾ ಇರು ಹ್ಯಾಗೆ
ಹ್ಯಾಗೆ ಆಗುತ್ತೆ ಮ್ಯಾಜಿಕ್ಕು!
ನಿನ್ನೂರು ಮಂಗಾಪುರ ಅಲ್ವಾ?
ಈಗ ನೋಡು
ಹ್ಯಾಗೆ ಆಗಿದೆ ಸಿಂಗಾಪುರ !

ನೋಡ್ತಾ ಇರು
ಹೈಟಕ್ ಆಸ್ಪತ್ರೆ ಬತ್ತದೆ
ಯಮಗಾತ್ರ ಪವರ್ ಪ್ರಾಜೆಕ್ಟ್ ಬಂದು
ರಾತ್ರಿ-ಹಗಲು ದೀಪ ಉರೀತದೆ
ಕುಡಿಯೋ ನೀರು ಬಾಟ್ಲಿನಲ್ಲಿ
ತಂತಾನೆ ತುಂಬ್ಕೊಂಡು
ಮನೆ ಬಾಗಿಲಿಗೆ ಬಂದು ಬೀಳ್ತದೆ

ಎತ್ತಿನ ಬಂಡಿಗಳು
ಏರೋಪ್ಲೇನ್ ಥರಾ ಹಾರ್ಕೋತ
ಸೀದಾ ದಿಲ್ಲಿಗೆ ಹೋಗ್ಬೇಕು
ಆಪಾಟಿ ರಸ್ತೆಗೋಳು ಬತ್ತವೆ
ನಿನ್ನ ಮಕ್ಕಳು, ಮರಿಮಕ್ಕಳು
ದೊಡ್ಡ ದೊಡ್ಡ ಶಾಲೆಗೆ ಹೋಗ್ತಾವೆ
ಎ.ಬಿ.ಸಿ.ಡಿ ಕಲಿತಾವೆ
ಅಮೆರಿಕೆಗೆ ಹಾರಿ
ಕೊಪ್ಪರಿಗೆ ಹಣ ಬಾಚ್ತಾವೆ.

ಹಬ್ಬೆಟ್ಟು-ಛಾಪಾಕಾಗದ
ಸಾಲ, ಬಡ್ತಿ, ಜಪ್ತಿ-
ಉಹುಂ ಕನಸಿನಲ್ಲೂ ಯೋಚಿಸಬ್ಯಾಡ
ನೀ... ರಾಮ- ಕೃಷ್ಣ ಅನ್ನೋದು ಬ್ಯಾಡ
ಕಂಪ್ಯೂಟರ್ ದೇವತೆ
ನಿನ್ನ ಮೈಮ್ಯಾಲೆ ಬಂದು
ಖಂಡಿತ ಮೋಕ್ಷ ಕಾಣಿಸ್ತಾಳ..

ಅದಕ್ಕೆ ಕಣಪ್ಪಾ ನಾ ಹೇಳ್ತೀನಿ ಕೇಳು..
ನೀ ಸುಮ್ಕಿದ್ದು ಬಿಡು..
ಬಾಯ್ ಮುಚ್ಕೊಂಡು ಕಿವಿ ಮುಚ್ಕೊಂಡು
ಕಣ್ ಮುಚ್ಕೊಂಡು

ಹಾಂ.. ಹಾಗೆ.. ಹಾಗೆ..
ಉಸಿರೆತ್ತಬ್ಯಾಡ

* ಜಾಗತೀಕರಣದ ಏರೊತ್ತಿನಲ್ಲಿ (೧೯೯೮) ಬರೆದ ಕವನ

# ಲೋಹಿಯಾ ಪ್ರಕಾಶನ

'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ

08392–257412, 99007 50549

ಒಟ್ಟು ಪ್ರಕಟಣೆಗಳು 187, ಲಭ್ಯವಿರುವವು 35

| | | | |
|---|---|---|---|
| 1. | ಲೋಹಿಯಾ | ಅನು: ಹಸನ್‌ನಯೀಂ ಸುರಕೋಡ | ರೂ. 150 |
| 2. | ಅಮೃತ ಮತ್ತು ವಿಷ | ರಂಜಾನ್ ದರ್ಗಾ | ರೂ. 125 |
| 3. | ಖರೇ ಖರೇ ಸಂಗ್ಯಾ–ಬಾಳ್ಯಾ | ಡಾ. ಎಂ.ಎಂ. ಕಲಬುರ್ಗಿ | ರೂ. 30 |
| 4. | ಶಿವಾಜಿ ಮೂಲ ಕನ್ನಡ ನೆಲ | ಡಾ. ಸರಜೂ ಕಾಟ್ಕರ್ | ರೂ. 150 |
| 5. | ಕರ್ನಾಟಕ ಏಕೀಕರಣ ಬಳ್ಳಾರಿ ಜಿಲ್ಲೆ ಹಿನ್ನೆಲೆಯಲ್ಲಿ | ಡಾ. ಕೋ. ಚೆನ್ನಬಸಪ್ಪ | ರೂ. 60 |
| 6. | ನಾನು ಪಾಟೀಲ ಪುಟ್ಟಪ್ಪ (ಭಾಗ 1) | ನಿರೂಪಣೆ : ಡಾ. ಸರಜೂ ಕಾಟ್ಕರ್ | ರೂ. 250 |
| 7. | ನಾನು ಪಾಟೀಲ ಪುಟ್ಟಪ್ಪ (ಭಾಗ 2) | ನಿರೂಪಣೆ : ಡಾ. ಸರಜೂ ಕಾಟ್ಕರ್ | ರೂ. 250 |
| 8. | ಎರಡು ಕಿರು ನಾಟಕಗಳು | ಎಸ್. ಮಾಲತಿ | ರೂ. 25 |
| 9. | ನೆನಪುಗಳು : ಚಂಪಾ ಲಿಮೆಯೆ | ಅನು : ಡಾ. ಸರಜೂ ಕಾಟ್ಕರ್ ಪ್ರೊ. ಎ. ಬಿ ಘಾಟಗೆ | ರೂ. 60 |
| 10. | ಅರ್ಥನೀತಿ | ಡಾ. ಹ. ಸೋಮಶೇಖರ | ರೂ. 75 |
| 11. | ಸೌಹಾರ್ದ ಸೌರಭ | ರಂಜಾನ್ ದರ್ಗಾ | ರೂ. 50 |
| 12. | ಇವರು ನಮ್ಮ ಜನರು | ನಾಡೋಜ ಡಾ. ಪಾಟೀಲ ಪುಟ್ಟಪ್ಪ | ರೂ. 60 |
| 13. | ಗೊಂದಲಿಗ್ಯಾ | ಎ.ಎಂ. ಮದರಿ | ರೂ. 150 |
| 14. | ಗಾಂಧಿಗೆ ಸಾವಿಲ್ಲ | ಅನು: ಹಸನ್‌ನಯೀಂ ಸುರಕೋಡ | ರೂ. 50 |
| 15. | ಚಾತುರ್ವರ್ಣ ಧರ್ಮದರ್ಶನ | ಕುಮಾರ ಕಕ್ಕಯ್ಯ ಪೋಳ | ರೂ. 100 |

# ಚಿಕ್ಕಗೌಡ್ರ ನಾಗನಗೌಡ – ಶಿವಮ್ಮ ದತ್ತಿ – ಪ್ರಕಟಣೆಗಳು

| | | | |
|---|---|---|---|
| 1. | ಬಸವಪ್ರಜ್ಞೆ | ರಂಜಾನ್ ದರ್ಗಾ | ರೂ. 15 |
| 2. | ಬಸವಣ್ಣನವರ ದೇವರು | ರಂಜಾನ್ ದರ್ಗಾ | ರೂ. 15 |
| 3. | ಬಸವಧರ್ಮದ ವಿಶ್ವಸಂದೇಶ | ರಂಜಾನ್ ದರ್ಗಾ | ರೂ. 15 |
| 4. | ಲಿಂಗವ ಪೂಜಿಸಿ ಫಲವೇನಯ್ಯಾ | ರಂಜಾನ್ ದರ್ಗಾ | ರೂ. 25 |
| 5. | ನಡೆನುಡಿ ಸಿದ್ಧಾಂತ | ರಂಜಾನ್ ದರ್ಗಾ | ರೂ. 25 |
| 6. | ಜಾತಿವ್ಯವಸ್ಥೆಗೆ ಸವಾಲಾದ ಶರಣರು | ರಂಜಾನ್ ದರ್ಗಾ | ರೂ. 30 |
| 7. | ಶರಣರ ಸಮಗ್ರ ಕ್ರಾಂತಿ | ರಂಜಾನ್ ದರ್ಗಾ | ರೂ. 90 |
| 8. | ಸಲ್ಲಲಿತ ಸನ್ಮಾರ್ಗ | ಚನ್ನಬಸವಪ್ಪ ಬೆಟ್ಟದೂರು | ರೂ. 30 |
| 9. | ಜಯದೇವಿ ತಾಯಿ ಲಿಗಾಡೆ | ಡಾ. ರಾಮಕೃಷ್ಣ ಮರಾಠೆ | ರೂ. 45 |
| 10. | ಸೇನೆಯಿಲ್ಲದ ಕದನ | ಡಾ. ರಂಗನಾಥ ಕಂಟನಕುಂಟೆ | ರೂ. 50 |
| 11. | ಗಾಂಧಿಯೊಂದಿಗೆ ಒಬ್ಬ ನಾಸ್ತಿಕ | ವೆಂಕಟೇಶ ಮಾಚಕನೂರ | ರೂ. 30 |
| 12. | ನನ್ನ ಬದುಕು | ಎ. ಎಸ್. ಹಿಪ್ಪರಗಿ | ರೂ. 30 |
| 13. | ಅವಿಶ್ರಾಂತ | ಡಾ. ಲಕ್ಷ್ಮಣ ಕೌಂಟೆ | ರೂ. 200 |
| 14. | ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯ | ಡಾ. ಕೋಚೆ | ರೂ. 40 |
| 15. | ಲಿಂಗಾಯತ<br>ಹಿಂದೂ ಅಲ್ಲ ವೀರಶೈವವೂ ಅಲ್ಲ | ಡಾ. ಕೋಚೆ | ರೂ. 18 |
| 16. | ಮಹಾತ್ಮಾ ಗಾಂಧಿ<br>ರಾಮಮನೋಹರ ಲೋಹಿಯಾ ಅವರು ಕಂಡಂತೆ | ಅನು : ಬಿ. ಎ. ಸನದಿ | ರೂ. 22 |
| 17. | ರಸಿಕ ರುದ್ರತಪಸ್ವಿ ಲೋಹಿಯಾ | ಸಂ : ಡಿ. ಎಸ್. ನಾಗಭೂಷಣ | ರೂ. 51 |
| 18. | ಸಮಾಜವಾದದ ಸಾಲುದೀಪಗಳು | ಸಂ : ಡಿ. ಎಸ್. ನಾಗಭೂಷಣ | ರೂ. 51 |
| 19. | ಹರನೆಂಬುದೇ ಸತ್ಯ... | ಕೃಷ್ಣಮೂರ್ತಿ ಹನೂರು | ರೂ. 100 |
| 20. | ಕಡೇ ಮಾತು | ಸವಿತಾ ನಾಗಭೂಷಣ | --- |



**ಕವನ ಸಂಕಲನಗಳು**

ನಾ ಬರುತ್ತೇನೆ ಕೇಳು (1987)
ಚಂದ್ರನನ್ನು ಕರೆಯಿರಿ ಭೂಮಿಗೆ (1991)
ಹೊಳೆ ಮಗಳು(1996)
**ಆಕಾಶ ಮಲ್ಲಿಗೆ**
ಆಯ್ದ ನೂರು ಕವನಗಳು(2000)
ಜಾತ್ರೆಯಲ್ಲಿ ಶಿವ (2002)
ಕಾಡುಲಿಲ್ಲಿ ಹೂವುಗಳು:
ಈ ವರೆಗಿನ ಕವನಗಳು (2006)
ದರುಶನ (2009)
**ಹಳ್ಳಿಯ ದಾರಿ**
ಆಯ್ದ 50 ಕವನಗಳು (2011)
ಕರುಣಾಳು (2016)
ದೇವರಿಗೆ ಹೋದೆವು (2018)

**ಕಾದಂಬರಿ:**

ಸ್ತ್ರೀ ಲೋಕ (1996 ಹಾಗೂ 2011)
**ಲೇಖನಗಳ ಸಂಗ್ರಹ**
ಹೂ ಮನಸ್ಸಿನ ಹೋರಾಟಗಾರ ಮತ್ತು
ಇತರ ಲೇಖನಗಳು

**ಸಂಪಾದಿತ ಕೃತಿ:**

ಮುಡಿ ಮಲ್ಲಿಗೆ(1992)
ಕವಿತೆ 1997

**ಸಹ ಸಂಪಾದನೆ:**

ಸುವರ್ಣ ಕಾವ್ಯ (2006)
ಹಣತೆ(ಜಿ.ಎಸ್.ಎಸ್. ಅಭಿನಂದನ ಗ್ರಂಥ)
ಇರುವಂತಿಗೆ (ವೈದೇಹಿ ಗೌರವ ಗ್ರಂಥ)

**ಕೆಲವು ಪ್ರಮುಖ ಪುರಸ್ಕಾರಗಳು**

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (2014)
ಡಿ.ಎಸ್. ಕರ್ಕಿ ಕಾವ್ಯ ಪುರಸ್ಕಾರ
ಪು.ತಿ.ನ. ಕಾವ್ಯ ಪ್ರಶಸ್ತಿ
ಮಾಸ್ತಿ ಕಾವ್ಯ ಪುರಸ್ಕಾರ
ಮಧುರ ಚೆನ್ನ ಕಾವ್ಯ ಪುರಸ್ಕಾರ
ಕಿ.ರಂ. ಕಾವ್ಯ ಪುರಸ್ಕಾರ
ಕನ್ನಡ ಸಾಹಿತ್ಯ ಪರಿಷತ್‌ನ ಮನುಶ್ರೀ ರಾಷ್ಟ್ರೀಯ ಪ್ರಶಸ್ತಿ
ಎಂ.ಕೆ. ಇಂದಿರಾ ಪ್ರಶಸ್ತಿ
ಬಿ.ಹೆಚ್. ಶ್ರೀಧರ ಸಾಹಿತ್ಯ ಪ್ರಶಸ್ತಿ



ಬೆಳೆಯುವವನಿಗಿಂತ
ಅಳೆಯುವವನದೇ
ಕಡೇ ಮಾತಾದರೆ ಹೇಗೆ ?

ಕಾಳುಕಡಿ ತುಂಬಿಕೊಂಡು
ಬಂದಿದೆ ಚಕ್ಕಡಿ
ವಾಲಾಡಿಕೊಂಡು ತಕ್ಕಡಿ
ವಸಿ ತಡಿ, ವಸಿ ತಡಿ
ಎಂದರೆ ಹೇಗೆ ?

ಅನ್ನ ಉಂಬೋರ ನುಡಿಗಟ್ಟೇ ಬೇರೆ
ಚಿನ್ನ ತಿಂಬೋರ ಒಳಗುಟ್ಟೇ ಬೇರೆ
ತಿಳಕೊಂಡೆ ಅಂದರೂ ತಿಳಿವಲ್ದು
ಯಾವುದು ದಿಟ ಯಾವುದು ಸಟೆ?



ಲೋಹಿಯಾ ಪ್ರಕಾಶನ, ಬಳ್ಳಾರಿ